# ಹೊಸ ಪುಸ್ತಕ ಪರಿಚಯ

ಸತ್ಯ ನಾರಾಯಣರಾವ್ (ಹೂ. ರಾ) ಸಂ.

**ಕವಿಗಳು ಕಂಡ ಬಿ. ಎಂ. ಶ್ರೀ : ವಿವಿಧ ಕವಿಗಳ ಕವನ ಸಂಕಲನ**

ಪು. xii+100 ಬೆಲೆ ರೂ 80/- 2012

ಆಚಾರ್ಯ ಬಿ. ಎಂ. ಶ್ರೀ ಯವರ ಮೇರು ವ್ಯಕ್ತಿತ್ವ, ಪಾಂಡಿತ್ಯ, ಸೃಜನ ಶೀಲತೆ, ಕಲ್ಪನಾಶ್ರೀಮಂತಿಕೆ, ಅಸಾಧಾರಣ ಸಾಹಿತ್ಯ ಸೃಷ್ಟಿ ಅನುಪಮ, 'ಶ್ರೀ' ಯವರು ಬರೆದದ್ದು ಕಡಿಮೆ ಆದರೆ ಅವರ ಕಾವ್ಯ, ನಾಟಕ, ಗದ್ಯ ಬರಹ, ಮುಂದಿನ ವೇಳೆಗೆಗೆ ಮಾರ್ಗದರ್ಶಿಯಾಗಿತ್ತು. 'ಬಿ. ಎಂ. ಶ್ರೀ ಯವರನ್ನು ಕುರಿತು ಹಿರಿಯ ಕಿರಿಯ ಕವಿಗಳಿಂದ ರಚಿತವಾದ ಆಯ್ದ ಅತಿ ಕವನಗಳ ಸಂಗ್ರಹ ಈ ಕೃತಿ.

ಲಿಂಗಯ್ಯ ಡಿ

**ಕನ್ನಡ ನವೋದಯ ಪ್ರವರ್ತಕ ಬಿ. ಎಂ. ಶ್ರೀಕಂಠಯ್ಯ:**

**ವ್ಯಕ್ತ ಪರಿಚಯ ಮತ್ತು ಸೂಕ್ತಗಳು (ಎರಡನೇ ಮುದ್ರಣ) [ಪ್ರಥಮ ಮುದ್ರಣ 2005]**

ಪು. 50 ಬೆಲೆ ರೂ. 30/- 2012

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಶಾಖೆಯ ಮಹಾಪೋಷಕರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಡು ಸ್ವಾಮಿಯವರ ಆಶಯದಂತೆ ರಚಿಸಿರುವ ಕಿರು ಪುಸ್ತಕ ಇದು. ಬಿ. ಎಂ. ಶ್ರೀಯವರನ್ನು ಕುರಿತು ಸಂಕ್ಷಿಪ್ತವಾದ ವಿದ್ವತ್ ಪೂರ್ಣ ಲೇಖನವಲ್ಲದೆ. ಅವರ ಆಯ್ದ ಸೂಕ್ತಗಳು ಜೀವನದ ಮೈಲಿಗಲ್ಲುಗಳು ಹಾಗೂ ಅವರ ಕೃತಿಗಳ ಮಾಹಿತಿ ಒದಗಿಸಲಾಗಿದೆ.

**ಶ್ರೀ ಕೃಷ್ಣ ದೇವರಾಯನ ದಿನಚರಿ.**

**(ಪ್ರಧಾನ ಸಂಪಾದಕರು : ಎಂ. ವಿ. ಸೀತಾರಾಮಯ್ಯ)**

ಪು. 92 ಬೆಲೆ ರೂ. 80/- 2013

ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಶಿಲಾಶಾಸನಗಳು, ನಾಣ್ಯಗಳು, ಮಾಸ್ತಿ ವೀರಗಲ್ಲುಗಳು, ತಾದಪೋಲೆ, ಭೂಜಗ ಪತ್ರ, ಪ್ರಾಚೀನ ಹಸ್ತ ಪ್ರತಿಗಳು, ಬಖೈರುಗಳೂ ಇತ್ಯಾದಿಗಳ ಪಾತ್ರೆ ಗುರುತರವಾದದ್ದು, ವಿಜಯನಗರ ಕೃಷ್ಣ ದೇವರಾಯನ ದಿನಚರಿಯ ವಿವರಗಳನ್ನು ತಾಳೆಗರಿ ಹಸ್ತ ಪ್ರತಿಯಲ್ಲಿ ನಮೂದಿಸಲಾಗಿತ್ತು. ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬುವರು ರಾಜಾಜ್ಞೆಯಂತೆ ಬರೆದಿದ್ದಾರೆ. ಲಿಪಿ ಮತ್ತು ಭಾಷೆಯ ಆಧಾರದ ಮೇಲೆ ಇದು ಬಹುಶಃ ಕ್ರಿ. ಶ. 16ನೇ ಶತಮಾನದ ಕನ್ನಡದಲ್ಲಿರುವ ತಾಳೆಯೋಲೆ ಗ್ರಂಥವೆನ್ನಬಹುದು. ಶ್ರೀ ರಾಮಾನುಜಾಚಾರ್ಯರ ವಂದನೆಯಿಂದ ಆರಂಭವಾಗುವ ಈ ಗ್ರಂಥದಲ್ಲಿ ಅರಸನ ದಿನ ನಿತ್ಯದ ಕಾರ್ಯಗಳನ್ನು ನಮೂದಿಸಲಾಗಿದೆ.

ಭಾಸ್ಕರ್ (ಎಂ. ಎಸ್)

**ಎಂ. ವಿ. ಸೀತಾರಾಮಯ್ಯ : ಜೀವನ ಮತ್ತು ಸಾಹಿತ್ಯ ಸಾಧನೆ**

ಪು. 96 ಬೆಲೆ ರೂ. 50/- 2013

'ರಾಘವ' ಕಾವ್ಯನಾಮದಿಂದ ಪ್ರಸಿದ್ಧರಾದ ಮೈಸೂರು ವೆಂಕಟದಾಸಪ್ಪ ಸೀತಾರಾಮಯ್ಯನವರು ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀ ಮಂತಗೊಳಿಸಿದ ಸಾಹಿತಿಗಳಲ್ಲಿ ಅಗ್ರಗಣ್ಯರು ಕಾವ್ಯ ಮೀಮಾಂಸೆ ಮತ್ತು ವ್ಯಾಕರಣ ಕ್ಷೇತ್ರಕ್ಕೆ ಅವರ ಕೊಡುಗೆ ಅವಿಸ್ಮರಣೀಯ ಎಂ. ವಿ. ಸೀ. ಅವರ ಶತಮಾನೋತ್ಸವ ಸಂದರ್ಭದಲ್ಲಿ ಅದರ ಕುರಿತದಂತೆ ವಿದ್ವಾಂಸರು, ಹಿತೈಷಿಗಳು ಹಾಗೂ ಶಿಷ್ಯರು ವಿಮರ್ಶಾತ್ಮಕ ಹಾಗೂ ವಿದ್ಯತ್ಪೂರ್ಣ ಲೇಖನಗಳನ್ನು ಹಲವಾರು ದಿನ ಪತ್ರಿಕೆ, ಮಾಸ ಪತ್ರಿಕೆ ಇತ್ಯಾದಿಗಳಲ್ಲಿ ಪ್ರಕಟಿಸಿದ್ದರು ಇವುಗಳಲ್ಲಿ ಕೆಲವನ್ನ ಆಯ್ಕೆ ಮಾಡಿ, ಪ್ರಸ್ತುತ ಕೃತಿಯಲ್ಲಿ ಸಂಕಲಿಸಲಾಗಿದೆ ಅಂತಿಮ ಅಧ್ಯಾಯದಲಿ ನೀಡಿರುವ ಎಂ. ವಿ. ಸೀ ಅವರ ಜೀವನ ಪಥ, ಸಾಹಿತ್ಯ ಕೃಷಿಯ ವಿವರಳು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಬಹುಉಪಯುಕ್ತ ಆಕರ ವಿವರಣೆ.

ಗೋವರ್ಧನ (ಸುಂಕಂ) ಮತ್ತು ಶ್ಯಾಮಲರತ್ನ ಕುಮಾರಿ

**ಹಸ್ತಪ್ರತಿ ಅಧ್ಯಯನ : ಸಮಾವೇಶ ಸಂಪುಟ – 1**

ಪು. 224 ರೂ. 100/– 2012

ಹಸ್ತ ಪ್ರತಿ ಎಂದರೆ ಕೈಬರಹ, ಪುಸ್ತಕ, ಗ್ರಂಥ ಎಂಬರ್ಥವಿದೆ, ಮುದ್ರಣ ಮಾಧ್ಯಮ ಇಲ್ಲದಾಗ ವಿದ್ವಾಂಸರು ತಮ್ಮ ಚಿಂತನೆಗಳನ್ನು ಎಲೆ, ಕಾಗಿದಗಳ ಮೇಲೆ ಬರೆದರು, ಹಸ್ತ ಪ್ರತಿಗಳು ದೇಶದ ಸಾಂಸ್ಕೃತಿಕ ಸಂಸತ್ತಿನ ಪ್ರತೀಕಗಳು ಎಂದರೆ ತಪ್ಪಾಗಲಾರದು ಮಾರ್ಚ್ 26, 2011 ರಂದು ಉಜಿರೆಯಲ್ಲಿ ನಡೆದ ಪ್ರಥಮ ರಾಷ್ಟ್ರೀಯ ಹಸ್ತಪ್ರತಿ ಸಮಾವೇಶದಲ್ಲಿ ಮಂಡಿತವಾದ 25 ಸಂಶೋಧನಾ ಪ್ರಬಂಧಗಳಲ್ಲಿ 23 ಲೇಖನಗಳು ಮಾತ್ರ ಈ ಸಂಪುಟದಲ್ಲಿ ಪ್ರಕಟವಾಗಿವೆ. ಇದುವರೆಗೂ ದೊರಕದೇ ಇದ್ದ ಹೊಸ ಹಸ್ತ ಪ್ರತಿಗಳನ್ನು ಪರಿಚಯಿಸಲಾಗಿದೆ. ಗ್ರಂಥ ಸಂಪಾದನೆಯ ಕಾರ್ಯದ ಬಗ್ಗೆ ವಿವೇಚಿಸಲಾಗಿದೆ ಲಿಪಿಯ ಬಗ್ಗೆ, ಚಿತ್ರಿಕಲೆಯ ಮಾಡಲಾಗಿದೆ ಹಿರಿಯ ಕಿರಿಯ ಸಂಶೋಧಕರಾ ಬರೆದಿರುವ ಈ ಲೇಖನಗಳು ಹಸ್ತಪ್ರತಿ ಅಧ್ಯಯ ನಾಭಿಲಾಷಿಗಳಿಗೆ ಸಾಕಷ್ಟು ಉಪಯುಕ್ತ ಮಾಹಿತಿ ಒದಗಿಸುತ್ತದೆ.
ಸ್ವಾಮಿ ಬಿ. ಎಸ್

**ಹಸ್ತಪ್ರತಿ ಶಾಸ್ತ್ರಜ್ಞ ಎಸ್. ಶಿವಣ್ಣ**
**(ಸಾಹಿತಿ ವಿದ್ವಾಂಸರ ಕಿರು ಪುಸ್ತಕ ಮಾಲೆ –1)**

ಪು. 64 ಬೆಲೆ ರೂ 30/– 2012

ಆಕರ ವಿಜ್ಞಾನಿ ಎಂದು ವಿದ್ವಾಂಸರಲ್ಲಿ ಪ್ರಸಿದ್ಧ ವಾಗಿರುವ ಶಿವಣ್ಣನವರು ಯಾವಾಗಲೂ ಮಠ ಮಾನ್ಯಗಳು, ವಿಶ್ವವಿದ್ಯಾಲಯಗಳನ್ನು ಸುತ್ತುತ್ತಾ, ಹಸ್ತ ಪ್ರತಿ ಪರಿಶೀಲಿಸುತ್ತ ಹೊಸಹೊಸ ಅನ್ವೇಷಣೆ ಮಾಡಿದವರು ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗವನ್ನು ಕಟ್ಟಿ ಬಳಸಿದವರು ಹಸ್ತ ಪ್ರತಿ ಸೂಚಿಗಳು, ವಚನ ಸಂಕಲನಗಳು, ಸ್ವರ ವಚನಗಳು, ಟೀಕಾ ಸಾಹಿತ್ಯ, ಹೀಗೆ ವೈವಿಧ್ಯಮಯ ವೈಶಿಷ್ಟಮಯ 45 ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಶಿವಣ್ಣನವರ ಜೀವನ ಸಾಧನೆಯ ಬಗೆಗೆ ಪ್ರಸ್ತುತ ಕೃತಿ ಪೂರಕವಾಗಿದೆ. ಇದರಲ್ಲಿರುವ ಕೃತಿಗಳ ಸೂಚಿ ಸಾಹಿತ್ಯ, ಶಿವಣ್ಣನವರು ಸಂಪಾದಿಸಿದ ಕೃತಿಗಳ ಸವಿವರಗಳು ಅತ್ಯಮೂಲ್ಯ ಆಕರ ಸಂಪನ್ಮೂಲಗಳಾಗಿವೆ.